# ೭
# ಸಾಲಿಗೊಂದು ಪ್ರಾಸ

– ಮನು ಗುಲಾಟಿ

**ಸಾರಾಂಶ: ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಭಾಷೆಯಲ್ಲಿ ಪ್ರಾಸ ಪದಗಳನ್ನು ಗುರುತಿಸಲು ಮತ್ತು ರಚಿಸಲು ಈ ಚಟುವಟಿಕೆಯು ಪ್ರೋತ್ಸಾಹಿಸುತ್ತದೆ. ಅದರೊಡನೆ ಪ್ರಾಸ ಪದಗಳನ್ನು ಸೃಷ್ಟಿಶೀಲವಾಗಿ ವಿದ್ಯಾಥಿಗಳು ಬಳಸಿ ಸೃಷ್ಟಿಶೀಲ ಕವನ ರಚನೆಯ ಕಡೆಗೂ ಮುನ್ನಡೆಸಲು ಈ ಚಟುವಟಿಕೆಯು ನೆರವಾಗುತ್ತದೆ.**

**ಪ್ರಮುಖ ಪದಗಳು: ಪ್ರಾಸ– rhyming words, ಪದ್ಯ ರಚನೆಯ ತಂತ್ರ– rhyme as a poetic device, ೬ ರಿಂದ ೮ನೇ ತರಗತಿ ಮಾಧ್ಯಮಿಕ ಶಾಲಾ ವಿದ್ಯಾರ್ಥಿಗಳು– middle school learners grade VI to VIII, ಪ್ರಾಸ ಪದಗಳನ್ನು ಬಳಸಿ ಪದ್ಯ– poem using similar sounding word, ಪದ್ಯವನ್ನು ಹಂತಹಂತವಾಗಿ ಬರೆಯುತ್ತಾರೆ– write poem in progressive manner.**

## ಉದ್ದೇಶಗಳು

- ಇಂಗ್ಲಿಷ್ ಭಾಷೆಯಲ್ಲಿ ಒಂದೇ ರೀತಿಯ ಧ್ವನಿಗಳಿರುವ ಪದಗಳನ್ನು (ಪ್ರಾಸ ಪದಗಳು) ಕಲಿಕಾರ್ಥಿಗಳು ಜೋಡಿಸುವುದನ್ನು ಕಲಿಯುವಂತೆ ಮಾಡುವುದು
- ಇಂಗ್ಲಿಷಿನಲ್ಲಿ ಪದ್ಯ ರಚನೆಯ ತಂತ್ರವಾಗಿ ಪ್ರಾಸವನ್ನು ಉಪಯೋಗಿಸುವುದನ್ನು ವಿದ್ಯಾರ್ಥಿಗಳು ಕಲಿಯಲು ನೆರವಾಗುವುದು.

## ಸಾಮಗ್ರಿಗಳು

ಒಂದೊಂದು ಪದ ಬರೆದಿರುವಂತಹ ಕಾಗದದ ತುಂಡುಗಳನ್ನು ಮಡಚಿ ಬೆರೆಸಿ ಒಟ್ಟಿಗೆ ಇಟ್ಟುಕೊಳ್ಳಿ

**ಕೌಶಲ:** ಸಾಮೂಹಿಕ ಬರವಣಿಗೆ

**ವ್ಯಾಪ್ತಿ:** ಮಾಧ್ಯಮಿಕ ಶಾಲಾ ವಿದ್ಯಾರ್ಥಿಗಳು (೬ರಿಂದ ೮ನೇ ತರಗತಿ)

**ವಿಧಾನ**

- ಅಧ್ಯಾಪಕರು ತರಗತಿಯ ವಿದ್ಯಾರ್ಥಿಗಳನ್ನು ೫–೬ ಸಂಖ್ಯೆಯ ಗುಂಪುಗಳಾಗಿ ವಿಂಗಡಿಸುತ್ತಾರೆ.
- ಪದಗಳನ್ನು ಬರೆದಿಟ್ಟುಕೊಂಡ ಚೀಟಿಗಳ ಸಮೂಹದಿಂದ ಒಂದನ್ನು ಆರಿಸಿಕೊಂಡು, ಅದರಲ್ಲಿ ಬರೆದಿರುವ ಪದವನ್ನು ಗಟ್ಟಿಯಾಗಿ ಓದಿ ಹೇಳುತ್ತಾರೆ. ಅನಂತರ ತಾವು ಓದಿದ ಪದಕ್ಕೆ ಪ್ರಾಸವಾಗುವ ಇನ್ನಿತರ ೩–೪ ಪದಗಳನ್ನು ಅವರು ಹೇಳುತ್ತಾರೆ. ಉದಾಹರಣೆಗೆ 'night' (ರಾತ್ರಿ) ಎಂಬ ಪದ ಹೇಳುತ್ತಾರೆ. ಗುಂಪಿನವರು ಅದರ ಪ್ರಾಸ ಪದಗಳನ್ನು ಪಟ್ಟಿಮಾಡುತ್ತಾರೆ: bright, white, light, height, might, tight, flight (ಶುಭ್ರ, ಬೆಳಕು, ಬಿಳಿ, ಬೆಳಕು, ಎತ್ತರ, ಬಲ, ಬಿಗಿ, ಹಾರುವಿಕೆ).
- ಪ್ರತಿ ಗುಂಪಿನ ಕಲಿಕಾರ್ಥಿಗಳೂ ಅಧ್ಯಾಪಕರು ನೀಡಿದ ಉದಾಹರಣೆಯ ರೀತಿಯಲ್ಲೇ ಚಟುವಟಿಕೆಯನ್ನು ಮಾಡಬೇಕು. ಪ್ರತಿ ಗುಂಪಿನ ಒಬ್ಬ ವಿದ್ಯಾರ್ಥಿಯು ಒಂದು ಕಾಗದದ ಚೂರನ್ನು ತೆಗೆದುಕೊಂಡು ಅದರಲ್ಲಿ ಬರೆದಿರುವ ಪದವನ್ನು ತನ್ನ ಗುಂಪಿನವರಿಗೆ ಓದಿ ಹೇಳುತ್ತಾನೆ/ಳೆ. ಈ ರೀತಿ ಓದಲಾದ ಪದಕ್ಕೆ ಪ್ರಾಸವಾಗುವ ಪದಗಳ ಬಗ್ಗೆ ಗುಂಪಿನಲ್ಲಿ ಚರ್ಚಿಸಿ, ಗುಂಪಿನ ಸದಸ್ಯರು ಪ್ರಾಸ ಪದಗಳನ್ನು ಪಟ್ಟಿಮಾಡುತ್ತಾರೆ. ಆವಶ್ಯಕವಾದರೆ ಅಧ್ಯಾಪಕರು ವಿದ್ಯಾರ್ಥಿಗಳಿಗೆ ಸಹಾಯ ಮಾಡುತ್ತಾರೆ.
- ಎಲ್ಲ ವಿದ್ಯಾರ್ಥಿಗಳು ಒಂದಿಷ್ಟು ಪ್ರಾಸಬದ್ಧ ಪದಗಳನ್ನು ಬರೆದಾದ ಮೇಲೆ, ಅಧ್ಯಾಪಕರು ಆ ಪದಗಳನ್ನು ಬಳಸಿ ಪುಟ್ಟ ವಾಕ್ಯಗಳನ್ನು ರಚಿಸಲು ಪ್ರೋತ್ಸಾಹಿಸುತ್ತಾರೆ. ವಾಕ್ಯದ ಕೊನೆಯಲ್ಲಿ ಆ ಪದಗಳು ಬರುವಂತೆ ವಾಕ್ಯಗಳ್ನು ಮಾಡಲು ಹೇಳುತ್ತಾರೆ. ಹಾಗೆ ಮಾಡಿದ ವಾಕ್ಯಗಳನ್ನು ಸುಸಂಬದ್ಧವಾಗಿ ಹೊಂದಿಸಿ, ಒಟ್ಟಿಗೆ ತಂದು ಒಂದು ಸಣ್ಣ ಪದ್ಯವನ್ನಾಗಿ ಮಾಡುತ್ತಾರೆ. ಅಧ್ಯಾಪಕರು 'night' ಎಂಬ ಪದವನ್ನು ಉದಾಹರಣೆಯಾಗಿ ಉಪಯೋಗಿಸಿ ವಿದ್ಯಾರ್ಥಿಗಳಿಗೆ ಈ ವಿಚಾರ ಅರ್ಥವಾಗುವಂತೆ ಮಾಡುತ್ತಾರೆ.

**ಉದಾಹರಣೆಗೆ:**

ದಿ ಸನ್ ವಾಸ್ ಶೈನಿಂಗ್ ಬ್ರೈಟ್ (The sun was shining bright)

ಇನ್ ಕೇಮ್ ದಿ ಲೈಟ್ (In came the light)

ಐ ವೋಕ್ ಅಪ್, ಬ್ರಷ್ಡ್ ಮೈ ಟೀತ್ ವೈಟ್ (I woke up, brushed my teeth white)

ದೆನ್, ವೆಂಟ್ ಆನ್ ದಿ ರೂಫ್ ಟು ಫ್ಲೈ ಅ ಕೈಟ್ (Then, went on the roof to fly a kite)

ಮೈ ಕೈಟ್ ರೀಚ್ಡ ಗ್ರೇಟ್ ಹೈಟ್ (My kite reached great height)

ಹ್ಯಾಪಿಲಿ, ಐ ವೆಂಟ್ ಟು ಬೆಡ್ ಅಟ್ ನೈಟ್. (Happily, I went to bed at night.)

೧. ಪ್ರತಿಯೊಂದು ಗುಂಪೂ ತಮಗೆ ಸಿಕ್ಕ ಪದಕ್ಕೆ ಪ್ರಾಸ ಪದಗಳನ್ನು ಬಳಸಿ, ಸುಸಂಬದ್ಧವಾಗಿ ಒಂದುಗೂಡಿಸಿ ಪದ್ಯವೊಂದನ್ನು ರಚಿಸುತ್ತಾರೆ. ತರಗತಿಗೆ ತಾವು ಬರೆದ ಪದ್ಯವನ್ನು ಜೋರಾಗಿ ಓದಿ ಹೇಳುವಂತೆ ಅಧ್ಯಾಪಕರು ವಿದ್ಯಾರ್ಥಿಗಳಿಗೆ ಪ್ರೋತ್ಸಾಹಿಸುತ್ತಾರೆ. ಅಥವಾ ಸೂಚನಾ ಫಲಕದಲ್ಲಿ ಪ್ರದರ್ಶಿಸಲು ಒಂದು ಹಾಳೆಯಲ್ಲಿ ಬರೆದು ಕೊಡಲು ಹೇಳುತ್ತಾರೆ.

**ಗಮನಿಸಿ:** ಮೇಲೆ ತಿಳಿಸಿರುವ ಚಟುವಟಿಕೆಯಲ್ಲಿ ವಿದ್ಯಾರ್ಥಿಗಳು ಪದ್ಯವನ್ನು ಹಂತ ಹಂತವಾಗಿ ಬರೆಯುತ್ತಾರೆ. ಆ ಮೂಲಕ ಅವರಿಗೆ ಸೃಜನಶೀಲ ಬರವಣಿಗೆಯ ಬಗ್ಗೆ ಇರಬಹುದಾದ ಭಯವನ್ನು ದೂರ ಮಾಡಬಹುದು. ಗುಂಪಿನಲ್ಲಿ ಕಾರ್ಯವೊಂದನ್ನು ಮಾಡಿದಾಗ ನಾಚಿಕೆ ಸ್ವಭಾವದವರೂ ಅಥವಾ ಕಲಿಕೆಯಲ್ಲಿ ಹಿಂದುಳಿದ ವಿದ್ಯಾರ್ಥಿಗಳೂ ಬೇರೆಯವರನ್ನು ಗಮನಿಸಿ, ಬೇಗ ಕಲಿಯುವ ಮಕ್ಕಳಿಂದ ತಾವೂ ಪ್ರೇರಿತರಾಗಿ ಕಲಿಯುತ್ತಾರೆ.

* * *

**ಚಿಂತನಾತ್ಮಕ ಪ್ರಶ್ನೆಗಳು:**

೧. ಇಲ್ಲಿ ಕೊಟ್ಟಿರುವ ಚಟುವಟಿಕೆಯಿಂದ ಯಾವ ಉದ್ದೇಶಗಳು ಈಡೇರುತ್ತವೆ ಎಂದು ಚರ್ಚಿಸಿ.

೨. ಪ್ರಾಸಪದಗಳನ್ನು ಸೃಷ್ಟಿಶೀಲವಾಗಿ ಮಕ್ಕಳು ಬಳಸಲು ಪ್ರೋತ್ಸಾಹಿಸಬಹುದಾದ ಬೇರೆ ವಿಧಾನಗಳನ್ನು ಕುರಿತು ಚಿಂತಿಸಿ ಮತ್ತು ಬರೆಯಿರಿ.

**ಮನು ಗುಲಾಟಿ,** ಸರ್ವೋದಯ ಕನ್ಯಾ ವಿದ್ಯಾಲಯ, ಟಿಜಿಟಿ, ಪಂಜಾಬಿ ಭಾಗ್, ನವದೆಹಲಿ. mwadhwa22@yahoo.com

**ಅನುವಾದ:** ಉಷಾ ಬಿ ಎನ್/ **ಪರಿಶೀಲನೆ:** ನಾಗಮಣಿ ಎಸ್ ಎನ್

**ಮೂಲ:** Language and Language Teaching Volume 2 Number 1 January 2013.

❑